# ॥ ಶ್ರೀ ರಾಘವೇಂದ್ರಾಷ್ಟಾಕ್ಷರಸ್ತೋತ್ರಂ ॥

ಗುರುರಾಜಾಷ್ಟಾಕ್ಷರಂ ಸ್ಯಾತ್ ಮಹಾಪಾತಕನಾಶನಮ್ ।
ಏಕೈಕಮಕ್ಷರಂ ಚಾತ್ರ ಸರ್ವಕಾಮ್ಯಾರ್ಥ ಸಿದ್ಧಿದಮ್ ॥ ೧ ॥
**ಅರ್ಥ :** ಶ್ರೀ ಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ 'ಶ್ರೀ ರಾಘವೇಂದ್ರಾಯ ನಮಃ' ಎಂಬ ಅಷ್ಟಾಕ್ಷರ ಮಂತ್ರವು ಮಹಾಪಾತಕಗಳನ್ನು ಕಳೆಯುವಂಥದಾಗಿದೆ. ಇದರಲ್ಲಿರುವ ಒಂದೊಂದು ಅಕ್ಷರವೂ ಸರ್ವಕಾಮ್ಯಾರ್ಥಗಳನ್ನು ಕೊಡುವಂಥದಾಗಿದೆ.

ರಕಾರೋಚ್ಚಾರಣಮಾತ್ರೇಣ ರೋಗಹಾನಿರ್ನ ಸಂಶಯಃ ।
ಘಕಾರೇಣ ಬಲಂ ಪುಷ್ಟಿಃಆಯುಃ ತೇಜಶ್ಚ ವರ್ಧತೇ ॥ ೨ ॥
**ಅರ್ಥ :** ರಕಾರದ ಉಚ್ಚಾರಣೆಯಿಂದ ರೋಗಹಾನಿಯಾಗುವಲ್ಲಿ ಸಂಶಯವಿಲ್ಲ. ಘಕಾರದ ಉಚ್ಚಾರದಿಂದ ಬಲ, ಪುಷ್ಟಿ, ಆಯುಷ್ಯ ಮತ್ತು ತೇಜಸ್ಸು (ಶರೀರದ ಕಾಂತಿ) ವರ್ಧಿಸುತ್ತವೆ.

ವಕಾರೇಣಾತ್ರ ಲಭತೇ ವಾಂಛಿತಾರ್ಥಾನ್ನ ಸಂಶಯಃ।
ದ್ರಕಾರೇಣಾಘರಾಶಿಸ್ತು ದ್ರಾವ್ಯತೇ ದ್ರುತಮೇವ ಹಿ ॥ ೩ ॥
**ಅರ್ಥ :** ವಕಾರೋಚ್ಚಾರದಿಂದ ಭಕ್ತನು ವಾಂಛಿತಾರ್ಥಗಳನ್ನೆಲ್ಲ ಪಡೆಯುತ್ತಾನೆ. ದ್ರಕಾರದ ಉಚ್ಚಾರಣದಿಂದ ಪಾಪಗಳ ರಾಶಿಯು ಕೂಡಲೇ ಓಡಿಸಲ್ಪಡುತ್ತದೆ.

ಯಕಾರೇಣ ಯಮಾದ್ಬಾಧೋ ವಾರ್ಯತೇ ನಾತ್ರ ಸಂಶಯಃ ।
ನಕಾರೇಣ ನರೇಂದ್ರಾಣಾಂ ಪದಮಾಪ್ನೋತಿ ಮಾನವಃ ॥ ೪ ॥
**ಅರ್ಥ :** ಯಕಾರದ ಉಚ್ಚಾರದಿಂದ ಯಮ ಬಾಧೆಯು ನಿಶ್ಚಿತವಾಗಿ ನಿವಾರಿಸಲ್ಪಡುತ್ತದೆ. ನಕಾರದ ಉಚ್ಚಾರದಿಂದ ಭಕ್ತನು ರಾಜಪದವಿಯನ್ನು (ಉನ್ನತ ಅಧಿಕಾರಗಳ ಸ್ಥಾನವನ್ನು) ಹೊಂದುತ್ತಾನೆ.

ಮಕಾರೇಣೈವ ಮಾಹೇಂದ್ರಮೈಶ್ವರ್ಯಂ ಯಾತಿ ಮಾನವಃ।
ಗುರೋರ್ನಾಮ್ನಾಶ್ಚ ಮಹಾತ್ಮ್ಯಂ ಅಪೂರ್ವಂ ಪರಮಾದ್ಭುತಮ್ ॥ ೫ ॥
**ಅರ್ಥ :** ಮಕಾರೋಚ್ಚಾರದಿಂದ ಇಂದ್ರನ ಐಶ್ವರ್ಯವನ್ನು ಪಡೆಯುವನು. ಈ ರೀತಿ ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ ಹೆಸರಿನ ಮಹಾತ್ಮ್ಯವು ಹಿಂದೆಂದೂ ಕಾಣದಂಥದೂ ಪರಮಾಶ್ಚರ್ಯ ಭರಿತವೂ ಆಗಿದೆ.

ತನ್ನಾಮಸ್ಮರಣಾದೇವ ಸರ್ವಾಭಿಷ್ಟಂ ಪ್ರಸಿಧ್ಯತಿ ।
ತಸ್ಮಾನ್ನಿತ್ಯಂ ಪಠೇದ್ಭಕ್ತ್ಯಾ ಗುರುಪಾದರತಸ್ಸದಾ ॥ ೬ ॥
**ಅರ್ಥ :** ಇವರ ಹೆಸರನ್ನು (ಅಷ್ಟಾಕ್ಷರ ಮಂತ್ರವನ್ನು) ಉಚ್ಚಾರ ಮಾಡುವದಿರಲಿ ಸ್ಮರಣೆ ಮಾಡುವ ಮಾತ್ರದಿಂದಲೇ ಸರ್ವಾಭೀಷ್ಟವೂ ಲಭಿಸುವುದು. ಆದ್ದರಿಂದ ಗುರುವರ್ಯರ ಪಾದಗಳನ್ನು ಆಶ್ರಯಿಸಿದ ಭಕ್ತನು ಈ ಮಂತ್ರವನ್ನು ನಿತ್ಯವೂ ಭಕ್ತಿಯಿಂದ ಪಠಿಸಬೇಕು.

ಶ್ರೀರಾಘವೇಂದ್ರಾಯ ನಮಃ ಇತ್ಯಷ್ಟಾಕ್ಷರಮಂತ್ರತಃ ।
ಸರ್ವಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೭ ॥
**ಅರ್ಥ : ಶ್ರೀರಾಘವೇಂದ್ರಾಯ ನಮಃ** (ಶ್ರೀ ರಾಘವೇಂದ್ರರಿಗೆ ನಮಸ್ಕಾರವು) ಎಂಬ ಅಷ್ಟಾಕ್ಷರ ಮಂತ್ರದ ಜಪ ಮಾಡುವುದರಿಂದ ಭಕ್ತನು ತನ್ನೆಲ್ಲ ಕಾಮನೆಗಳನ್ನು ಪಡೆಯುತ್ತಾನೆ ಎಂಬಲ್ಲಿ ಸಂದೇಹ ಬುದ್ಧಿಯನ್ನು ಮಾಡಕೂಡದು.

ಅಷ್ಟೋತ್ತರಶತಾವೃತ್ತಿಂ ಸ್ತೋತ್ರಸ್ಯಾಸ್ಯ ಕರೋತಿ ಯಃ ।
ತಸ್ಯ ಸರ್ವಾರ್ಥಸಿದ್ಧಿಸ್ಸ್ಯಾತ್ ಗುರುರಾಜಪ್ರಸಾದತಃ ॥ ೮ ॥
**ಅರ್ಥ :** ಯಾವನು ಶ್ರೀಗುರುವರ್ಯರ ಈ ಸ್ತೋತ್ರವನ್ನು ೧೦೮ ಸಲ ಪಠಿಸುವನೋ ಅವನಿಗೆ ಗುರುಸಾರ್ವಭೌಮರ ಅನುಗ್ರಹದಿಂದ ಸರ್ವಾರ್ಥಗಳ ಸಿದ್ಧಿಯಾಗುತ್ತದೆ.

ಏತದಷ್ಟಾಕ್ಷರಸ್ಯಾತ್ರ ಮಹಾತ್ಮ್ಯಂ ವೇತ್ತಿ ಕಃ ಪುಮಾನ್ ।
ಪಠನಾದೇವ ಸರ್ವಾರ್ಥಸಿದ್ಧಿರ್ಭವತಿ ನಾನ್ಯಥಾ ॥ ೯ ॥
**ಅರ್ಥ :** ಈ ಅಷ್ಟಾಕ್ಷರ ಮಂತ್ರದ ಮಹಾತ್ಮೆಯನ್ನು ಯಾವ ಭಕ್ತನು ಸಂಪೂರ್ಣವಾಗಿ ತಿಳಿಯಲು ಸಮರ್ಥನಾದಾನು? ಈ ಅಷ್ಟಾಕ್ಷರ ಮಂತ್ರದ ಪಠಣ ಮಾಡುವ ಮಾತ್ರದಿಂದ ಸರ್ವಾರ್ಥಗಳ ಸಿದ್ಧಿಯಾಗುತ್ತದೆ. ಬೇರೆ ಮಾರ್ಗದಿಂದ ಆಗುವುದಿಲ್ಲ.

ಸ್ವಾಮಿನಾ ರಾಘವೇಂದ್ರಾಖ್ಯ ಗುರುಪಾದಾಬ್ಜಸೇವಿನಾ ।
ಕೃತಮಷ್ಟಾಕ್ಷರಸ್ತೋತ್ರಂ ಗುರುಪ್ರೀತಿಕರಂ ಶುಭಮ್ ॥ ೧೦ ॥
**ಅರ್ಥ :** ಶ್ರೀರಾಘವೇಂದ್ರತೀರ್ಥರೆಂಬ ಗುರುವರ್ಯರ ಪಾದಕಮಲಗಳನ್ನು ಸದಾ ಸೇವಿಸುತ್ತಿರುವ ಸ್ವಾಮಿರಾಯ ಎಂಬುವರಿಂದ, ಗುರುಗಳಿಗೆ ಪ್ರೀತಿಯನ್ನುಂಟು ಮಾಡುವ ಶುಭಕರವಾದ ಈ ಅಷ್ಟಾಕ್ಷರ ಸ್ತೋತ್ರವು ವಿರಚಿಸಲ್ಪಟ್ಟಿದೆ.

॥ಇತಿಶ್ರೀಗುರುಜಗನ್ನಾಥದಾಸಾರ್ಯವಿರಚಿತ ಶ್ರೀರಾಘವೇಂದ್ರಾಷ್ಟಾಕ್ಷರಸ್ತೋತ್ರಂ ಸಂಪೂರ್ಣಂ ॥
॥ ಶ್ರೀಕೃಷ್ಣಾರ್ಪಣಮಸ್ತು ॥